ತಂತ್ರಸಾರೋಕ್ತ ದೇವಪೂಜಾಪದ್ಧತಿ

ಸಂಗ್ರಹ : ಪಂ.ವಾದಿರಾಜಾಚಾರ್ಯ ಕರಣಂ

ಮೊದಲ ಮುದ್ರಣ : ಏಪ್ರಿಲ್ 2014 ಪ್ರತಿಗಳು 2000
ದ್ವಿತೀಯ ಮುದ್ರಣ : ನವೆಂಬರ್ 2014 ಪ್ರತಿಗಳು 2000

ಪುಟಗಳು : 120



ಬೆಲೆ : ಭಕ್ತಿಪೂರ್ವಕ ದೇವರ ಪೂಜೆ

**Vishva Madhwa Maha Parishat**
#11 2nd Floor Uttaradi Math Building.
Uttaradi Math Road, Shankarpuram,
Basavanagudi BANGALORE - 4
Phone : 080 26603692, e-mail-vmmp05@gmail.com

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

ಮುದ್ರಣ : ವಾಗರ್ಥ, ಬೆಂಗಳೂರು-೧೯. vagartha@yahoo.com

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

# ''ಅನುಗ್ರಹ ಸಂದೇಶ''

ಸಮಸ್ತರಿಗೆ, ದೇಶ-ಕಾಲಗಳನ್ನು, ದೇಹೇಂದ್ರಿಯಾದಿಗಳನ್ನು, ಅನ್ನ-ನೀರುಗಳನ್ನು, ಮನೆ-ಗೃಹಿಣಿಯರನ್ನು ಯಥಾಯೋಗ್ಯವಾಗಿ ನೀಡಿದ ಕರುಣೆಯ ಕಡಲು ಶ್ರೀಕೃಷ್ಣ.

ಭಕ್ತರ ಭವಬಂಧನವನ್ನು ಪರಿಹರಿಸುವ ಅನಿಮಿತ್ತಬಂಧು ಶ್ರೀಹರಿ.

ಅನಂತಜೀವರಿಗೆ ಅನಂತಾನಂತ ಉಪಕಾರವನ್ನು ಮಾಡಿದವನು ಭಗವಂತ.

ಮೋಕ್ಷವಾಗುವ ತನಕ ಪ್ರತಿಯೊಂದು ಕಣ, ಪ್ರತಿಯೊಂದು ಕ್ಷಣ ದೇವರು ಹಾಕಿದ ಭಿಕ್ಷೆ. ನಮ್ಮ ಬದುಕೆಲ್ಲ ಆ ಭಗವಂತನ ಭಿಕ್ಷೆಯಾಗಿದೆ.

ಹೀಗಾಗಿ ನಾವು ತಿನ್ನುವ, ತೊಡುವ, ವಿಹಿತವಾದ ಸಮಸ್ತವಸ್ತುಗಳನ್ನು ದೇವರಿಗೆ ಸಮರ್ಪಿಸಬೇಕು. ಅದಕ್ಕಾಗಿ ನಿತ್ಯವೂ ದೇವರನ್ನು ಪೂಜಿಸಬೇಕು. ದೇವರನ್ನು ಪೂಜಿಸಿದವನಿಗೆ ಮಾತ್ರ ಭುಜಿಸುವ ಅವಕಾಶ.

ಅಲ್ಲದೇ ವೈಶ್ವದೇವ-ಬಲಿಹರಣಗಳನ್ನು ಮಾಡುವ ಮೂಲಕ ಗೃಹಸ್ಥ ಪಂಚಸೂನಾದೋಷಗಳನ್ನು ಕಳೆದುಕೊಳ್ಳುತ್ತಾನೆ. ಪೂಜಾ-ವೈಶ್ವದೇವ-ಬಲಿಹರಣಗಳ ಕ್ರಮವನ್ನು ತಿಳಿಸಲು ಈ **ತಂತ್ರಸಾರೋಕ್ತ ದೇವಪೂಜಾಪದ್ಧತಿ** ಎಂಬ ಹೊತ್ತಿಗೆ ಸಿದ್ಧವಾಗಿದೆ. ಇದರ ಉಪಯೋಗವನ್ನು ಸದ್ಭಕ್ತರೆಲ್ಲರೂ ಪಡೆದುಕೊಳ್ಳಬೇಕು. ಈ ಹೊತ್ತಿಗೆಯನ್ನು ಸಂಗ್ರಹ ಮಾಡಿದ ನಮ್ಮ ಪ್ರಿಯಶಿಷ್ಯನಾದ ವಾದಿರಾಜಾಚಾರ್ಯ ಕರಣಂ ಇವನಿಂದ ಮತ್ತಿಷ್ಟು ಹೆಚ್ಚು ವೇದವ್ಯಾಸರ ಶ್ರೀಮದಾಚಾರ್ಯರ ಸೇವೆಯಾಗಲಿ ಎಂದು ಅಸ್ಮದುಪಾಸ್ಯ ಮೂಲಸೀತಾಸಮೇತಮೂಲರಾಮ, ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ಅನೇಕ ನಾರಾಯಣ ಸ್ಮರಣೆಗಳು

ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು ಉತ್ತರಾದಿಮಠ

# || ಅಥ ಅತಿ ಸಂಕ್ಷಿಪ್ತ ದೇವಪೂಜಾಪದ್ಧತಿಃ ||

ಸ್ನಾನ ಮಾಡಿ ಮಡಿಬಟ್ಟೆಯನ್ನುಟ್ಟು ನಾಮ ಮತ್ತು ಮುದ್ರೆಗಳನ್ನು ಧರಿಸಿ ಸಂಧ್ಯಾವಂದನೆಯನ್ನು ಮಾಡಬೇಕು. ನಂತರ ದೇವರ ಪೂಜೆಯನ್ನು ಮಾಡಬೇಕು.

**ಸಂಕಲ್ಪ - ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ, ಶ್ರೀಗೋವಿಂದ ಗೋವಿಂದ ಶ್ರೀವಿಷ್ಣೋ ವಿಷ್ಣೋ... ಭಾರತೀರಮಣಮುಖ್ಯ-ಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಭಗವತೋ ಬಲೇನ, ಭಗವತೋ ವೀರ್ಯೇಣ, ಭಗವತಸ್ತೇಜಸಾ, ಭಗವತಃ ಕರ್ಮಣಾ, ಭಗವತೋ ವಾಸುದೇವಸ್ಯ ಆಜ್ಞಯಾ ಯಥಾಮಿಲಿತೋಪಚಾರದ್ರವ್ಯೈಃ ವಾಸುದೇವೇನ ಪ್ರೇರಿತೋಽಹಂ ಭಗವತಃ ವಾಸುದೇವಸ್ಯ ಷೋಡಶೋಪಚಾರೈಃ ಪೂಜಾಖ್ಯಂ ಕರ್ಮ ಕರಿಷ್ಯೇ ||**

**ವಂದೇ ವಿಷ್ಣುಂ ನಮಾಮಿ ಶ್ರಿಯಮಥ**
**ಚ ಭುವಂ ಬ್ರಹ್ಮವಾಯೂ ಚ ವಂದೇ ।**
**ಗಾಯತ್ರೀಂ ಭಾರತೀಂ ತಾಮಪಿ**
**ಗರುಡಮನಂತಂ ಭಜೇ ರುದ್ರದೇವಮ್ ||**

**ದೇವೀಂ ವಂದೇ ಸುಪರ್ಣೀಮಹಿಪತಿ-**
**ದಯಿತಾಂ ವಾರುಣೀಮಪ್ಯುಮಾಂ ತಾಮ್ ।**
**ಇಂದ್ರಾದೀನ್ ಕಾಮಮುಖ್ಯಾನಪಿ**
**ಸಕಲಸುರಾನ್ ತದ್ಗುರೂನ್ ಮದ್ಗುರೂಂಶ್ಚ ||**

**ದ್ವಾರದೇವತಾಭ್ಯೋ ನಮಃ || ಸರ್ವಾರಿಷ್ಟನಿರಸನಮಸ್ತು ||**

ದೀಪಪ್ರಜ್ವಾಲನೆ ಮಾಡಬೇಕು. ಘಂಟೆಯನ್ನು ಬಾರಿಸಬೇಕು. ಒಂದು ಶಾಲಿಗ್ರಾಮ, ಎರಡು ಚಕ್ರಾಂಕಿತ, ಒಂದು ಸುದರ್ಶನ, ಡೊಗ್ಗಾಲು ಕೃಷ್ಣನ ಪ್ರತಿಮೆ ಒಂದು, ಶಿಂಶುಮಾರನ ಪ್ರತಿಮೆ ಒಂದು, ಒಂದು ವಿಷ್ಣುಪಾದ ಇಷ್ಟನ್ನು ಒಂದು ಶುದ್ಧವಾದ ಬೆಳ್ಳಿಯ ಅಥವಾ ತಾಮ್ರದ ತಟ್ಟೆಯಲ್ಲಿ ಇಟ್ಟುಕೊಳ್ಳಬೇಕು.

ಮತ್ತೊಂದು ತಟ್ಟೆಯಲ್ಲಿ ಶಂಖವನ್ನು ಇಟ್ಟುಕೊಳ್ಳಬೇಕು. ಇನ್ನೊಂದು ತಟ್ಟೆಯಲ್ಲಿ ಪ್ರಾಣದೇವರನ್ನು ಇಟ್ಟುಕೊಳ್ಳಬೇಕು. ಮತ್ತೊಂದು ತಟ್ಟೆಯಲ್ಲಿ ಶೇಷ-ಗರುಡರನ್ನು ಇಟ್ಟುಕೊಳ್ಳಬೇಕು.

**ನಿರ್ಮಾಲ್ಯವಿಸರ್ಜನೆ**

ರುದ್ರದೇವರು ದೇವರ ಎಡಭಾಗದಲ್ಲಿ ತಮ್ಮ ತಲೆಯ ಮೇಲೆ ಪಾತ್ರೆಯನ್ನು ಧರಿಸಿ ನಿಂತಿರುತ್ತಾರೆ ಎಂದು ಅನುಸಂಧಾನ ಮಾಡಿಕೊಳ್ಳಬೇಕು. ಹಿಂದಿನ ದಿವಸ ದೇವರಿಗೆ ಏರಿಸಿದ ಹೂ-ತುಳಸಿಗಳನ್ನು ಎಡಭಾಗದಲ್ಲಿಯ ಆ ಪಾತ್ರೆಯಲ್ಲಿ ವಿಸರ್ಜಿಸಬೇಕು. ಆವಾಗ **ಅಹಂ ರುದ್ರೇಭಿಃ** ಎಂಬ ಈ ಮಂತ್ರವನ್ನು ಪಠಿಸಬೇಕು.

**ಓಂ ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ ।**

**ಅಹಂ ಮಿತ್ರಾ ವರುಣೋಭಾಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ ॥**

**ನಿರ್ಮಾಲ್ಯಾಭಿಷೇಕ**

ಬೆಳ್ಳಿ ಅಥವಾ ತಾಮ್ರದ ತಟ್ಟೆಯಲ್ಲಿ ಇಟ್ಟುಕೊಂಡಿರುವ ಶಾಲಗ್ರಾಮಾದಿಗಳಿಗೆ ನಿರ್ಮಾಲ್ಯಾಭಿಷೇಕವನ್ನು ಮಾಡಬೇಕು. ಒಂದು ಸಲ ನಿರ್ಮಾಲ್ಯಾಭಿಷೇಕ ಮಾಡಿ ಆ ನಿರ್ಮಾಲ್ಯಜಲವನ್ನು ವಿಸರ್ಜಿಸಬೇಕು. ಆದನ್ನು ಉಪಯೋಗಿಸ ಬಾರದು. ನಂತರ ಮತ್ತೆ ನಿರ್ಮಾಲ್ಯವನ್ನು ಮಾಡಿ ಆ ನಿರ್ಮಾಲ್ಯಜಲವನ್ನು ಬ್ರಹ್ಮಯಜ್ಞಾದಿಗಳಿಗಾಗಿ ತೆಗೆದಿಟ್ಟುಕೊಳ್ಳಬೇಕು.

ನಿರ್ಮಾಲ್ಯಾಭಿಷೇಕವನ್ನು ಅಂಭೃಣೀಸೂಕ್ತದಿಂದ ಮಾಡಬಾರದು. ಪುರುಷಸೂಕ್ತದಿಂದಲೇ ಮಾಡಬೇಕು. ಕೆಳಗೆ ಕೊಟ್ಟಿರುವ ಪುರುಷಸೂಕ್ತದ ಈ ಮಂತ್ರವನ್ನಂದು ನಿರ್ಮಾಲ್ಯಾಭಿಷೇಕ ಮಾಡಬೇಕು.

**ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್ ॥ ಋ.ಸಂ.10.90.01॥**

(ಶಾಲಿಗ್ರಾಮಾದಿಗಳನ್ನು ತೆಗೆದಿಟ್ಟು ತೀರ್ಥವನ್ನು ಇಟ್ಟುಕೊಳ್ಳಬೇಕು.)

**ಶಂಖಾಭಿಷೇಕ** ( ಶಂಖ ಮಾತ್ರ ).

**ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಮ್ । ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥ ಋ.ಖಿಲ ॥**

ಈ ಮಂತ್ರವನ್ನು ಪಠಿಸುತ್ತಾ ಶಂಖಕ್ಕೆ ಅಭಿಷೇಕ ಮಾಡಬೇಕು. ನಂತರ ಆ ಜಲವನ್ನು ವಿಸರ್ಜಿಸಬೇಕು. ಶಂಖವನ್ನು ವಸ್ತ್ರದಿಂದ ಒರಿಸಿ ಇಟ್ಟುಕೊಳ್ಳಬೇಕು.

**ಪ್ರಾಣದೇವರ ಅಭಿಷೇಕ** ( ಪ್ರಾಣದೇವರ ಪ್ರತಿಮೆ ಮಾತ್ರ ).

**✓ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ ದೇವಸ್ಯ ಭರ್ಗಃ ಸಹಸೋ ಯತೋ ಜನಿ । ಯದೀಮುಪ ಹ್ವರತೇ ಸಾಧತೇ ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ॥ ಋ.ಸಂ.1.141.1 ॥**

**✓ಮಾತರ್ಮೇ ಮಾತರಿಶ್ವನ್ ಪಿತರತುಲಗುರೋ ಭ್ರಾತರಿಷ್ಟಾಪ್ತಬಂಧೋ**
**ಸ್ವಾಮಿನ್ ಸರ್ವಾಂತರಾತ್ಮನ್ ಅಜರಜರಯಿತರ್ಜನ್ಮಮೃತ್ಯಾಮಯಾನಾಮ್ ।**
**ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವನ್ನೂರ್ಜಿತಾಂ ನಿರ್ನಿಮಿತ್ತಾಮ್**
**ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣಬೃಹತೀಂ ಶಾಶ್ವತೀಮಾಶು ದೇವ ॥**

ಈ ಮಂತ್ರಗಳನ್ನು ಹೇಳುತ್ತಾ ಮುಖ್ಯಪ್ರಾಣದೇವರ ಅಭಿಷೇಕವನ್ನು ಮಾಡಬೇಕು.

**ಗರುಡ-ಶೇಷಾಭಿಷೇಕ** ( ಮೂರ್ತಿಗಳು ಮಾತ್ರ ).

**ಗರುಡಾಯ ನಮಃ, ಶೇಷಾಯ ನಮಃ ।**

ಈ ಮಂತ್ರಗಳಿಂದ ಗರುಡ-ಶೇಷರ ಅಭಿಷೇಕವನ್ನು ಮಾಡಬೇಕು.

**ಕಲಶ ಪೂಜಾ** ( ಪರಮಾತ್ಮನಿಗೆ ಅಭಿಷೇಕದ ನೀರನ್ನು ಪೂಜಿಸಬೇಕು ).

(ಎರಡು ಕಲಶಗಳಲ್ಲಿ ನೀರು ತುಂಬಿ, ತುಳಸಿಯನ್ನು ಹಾಕಿ, ಕಲಶದ ನಾಲ್ಕುದಿಕ್ಕುಗಳಲ್ಲಿ ಗಂಧ-ಅಕ್ಷತೆ ಹಚ್ಚಿ ಕಲಳಗಳನ್ನು ಪೂಜಿಸಬೇಕು.)

**ಕಲಶದೇವತಾಭ್ಯೋ ನಮಃ, ಅಜಾದಿದೇವತಾಭ್ಯೋ ನಮಃ, ಓಂ ನಮೋ ನಾರಾಯಣಾಯ ಓಂ,** (೮ ಸಲ ನಾರಾಯಣಮಂತ್ರವನ್ನು ಪಠಿಸುತ್ತಾ ಕಲಶವನ್ನು ಅಭಿಮಂತ್ರಿಸಬೇಕು.)

ಶಾಲಿಗ್ರಾಮ ಶಿಲಾಯಾಂತು ನಿತ್ಯಂ ಸನ್ನಿಹಿತೋ ಕಲಿ: ।

 ಭೀಮಸೇನ ಮಹಾಬಾಹೋ ಗದಯಾ ಪ್ರೋಕ್ತಸಂ ಕುರು॥ 

**ಶುದ್ಧಾಭಿಷೇಕ** (ಶಾಲಿಗ್ರಾಮ ಹಾಗೂ ಚಕ್ರಾಂಕಿತ, ವಿಷ್ಣುವಿನ ವಿಗ್ರಹಗಳ).

~~ಶಾಲಿಗ್ರಾಮ ಶಿಲಾಯಾಂತು ನಿತ್ಯಂ~~

**ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್॥ಋ.ಸಂ.10.90. 01॥**

ಈ ನೀರನ್ನು ವಿಸರ್ಜಿಸಬೇಕು.

ಪುರುಷಸೂಕ್ತದ ಈ ಮಂತ್ರವನ್ನು ಹೇಳುತ್ತಾ ಕಲಶದಲ್ಲಿರುವ ನೀರನ್ನು ತೆಗೆದುಕೊಂಡು ಶಂಖದಿಂದ ಅಭಿಷೇಕ ಮಾಡಬೇಕು. ನಂತರ ಇನ್ನೊಂದು ಕಲಶವನ್ನು ಹಾಗೆಯೇ ಎತ್ತಿ ಅಭಿಷೇಕ ಮಾಡಬೇಕು. ನಂತರ ಸ್ವಾದೂದಕದಿಂದಲೂ ಅಭಿಷೇಕ ಮಾಡಬೇಕು. ಶಾಲಿಗ್ರಾಮ-ಪ್ರತಿಮೆಗಳನ್ನು ಒರಿಸಿ ಇಡಬೇಕು. ತೀರ್ಥವನ್ನು ಎರಡು ಭಾಗವಾಗಿ ಇಟ್ಟುಕೊಳ್ಳಬೇಕು. ರಾತ್ರಿಗಾಗಿ ಒಂದನ್ನು ಪ್ರತ್ಯೇಕವಾಗಿಟ್ಟುಕೊಳ್ಳಬೇಕು.

[**ಅರ್ಚನೆ - ಓಂ ಕೇಶವಾಯ ನಮಃ ಓಂ ... ಓಂ ಕೃಷ್ಣಾಯ ನಮಃ ಓಂ ॥**

**ನಮೋಸ್ತ್ವನಂತಾಯ ಸಹಸ್ರಮೂರ್ತಯೇ**
**ಸಹಸ್ರಪಾದಾಕ್ಷಿಶಿರೋರುಬಾಹವೇ ।**
**ಸಹಸ್ರನಾಮ್ನೇ ಪುರುಷಾಯ ಶಾಶ್ವತೇ**
**ಸಹಸ್ರಕೋಟಿಯುಗಧಾರಿಣೇ ನಮಃ ॥**

ಈ ಮಂತ್ರವನ್ನು ಹೇಳುತ್ತಾ ಗಂಧ, ತುಳಸೀ, ಪುಷ್ಪಗಳನ್ನು ದೇವರಿಗೆ ಸಮರ್ಪಿಸಬೇಕು.] ಕೊನೆಗೆ ಮಾಡಬೇಕು.

[**ಧೂಪ-ದೀಪ**

**ವನಸ್ಪತ್ಯುದ್ಭವೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।**
**ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ॥**

ಕೆಂಡದ ಮೇಲೆ ದಶಾಂಗವನ್ನು ಹಾಕಿ ಈ ಶ್ಲೋಕವನ್ನು ಪಠಿಸುತ್ತಾ ಧೂಪಾರತಿಯನ್ನು ಮಾಡಬೇಕು.

**ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।**
**ದೀಪಂ ಗೃಹಾಣ ದೇವೇಶ ತ್ರೈಲೋಕ್ಯತಿಮಿರಾಪಹ ॥**] ಕೊನೆಗೆ.

ಈ ಶ್ಲೋಕವನ್ನು ಹೇಳುತ್ತಾ ಮೂರು ಬತ್ತಿಗಳಿಂದ ಆರತಿಯನ್ನು ಮಾಡಬೇಕು. ಈ ದೀಪವನ್ನು ಶಾಂತಗೊಳಿಸಬೇಕು.

**ನೇವೇದ್ಯ** (ನೀರು, ಪದಾರ್ಥ)

ದೇವರ ಎದುರಿಗೆ ಅಥವಾ ಬಲಭಾಗದಲ್ಲಿ ನೀರಿನಿಂದ ಚತುರಸ್ರ ಮಂಡಲ ಮಾಡಬೇಕು. ಅದರ ಮೇಲೆ ನೈವೇದ್ಯವನ್ನು ಇಡಬೇಕು. ಆ ನೈವೇದ್ಯವನ್ನು ಅಭಿಘಾರಮಾಡಬೇಕು. ನೈವೇದ್ಯದ ಮೇಲೆ ತುಲಸೀದಳ ಹಾಕಬೇಕು. ಗಾಯತ್ರೀ ಮಂತ್ರ ಹೇಳಿ, ಪ್ರೋಕ್ಷಣೆ ಮಾಡಿ, ಪರಿಷೇಚನೆ ಮಾಡಬೇಕು. ಆಮೇಲೆ ಶಂಖ, ಚಕ್ರ, ಧೇನು, ತಾರ್ಕ್ಷ್ಯ, ಮೇರು, ಚಂದ್ರ, ಈ ಮುದ್ರೆಗಳನ್ನು ತೋರಿಸಬೇಕು.

ನೈವೇದ್ಯದ ಸಂದರ್ಭದಲ್ಲಿ **ಓಂ ನಮೋ ನಾರಾಯಣಾಯ ಓಂ** ಈ ಮಂತ್ರವನ್ನು ೧೨, ೧೦೮, ಯಥಾಶಕ್ತಿ ಪಠಿಸಬೇಕು. ನಿವೇದನೀಯವಾದ ಅನ್ನದಲ್ಲಿರುವ ಪರಮಾತ್ಮ, ಪ್ರತಿಮಾಂತರ್ಯಾಮಿಯಾದ ಪರಮಾತ್ಮ, ಪೂಜಕನಾದ ತನ್ನಲ್ಲಿರುವ ಪರಮಾತ್ಮ ಅಭಿನ್ನನಾಗಿರುವನೆಂದು ಸ್ಮರಿಸಬೇಕು.

**ಆಪೋಶನಂ ಸಮರ್ಪಯಾಮಿ ।। ಅಮೃತೋಪಸ್ತರಣಮಸಿ ಸ್ವಾಹಾ । ಪ್ರಾಣಾಯ ಸ್ವಾಹಾ ।। ಅಪಾನಾಯ ಸ್ವಾಹಾ ।। ವ್ಯಾನಾಯ ಸ್ವಾಹಾ ।। ಉದಾನಾಯ ಸ್ವಾಹಾ ।। ಸಮಾನಾಯ ಸ್ವಾಹಾ ।। ಉತ್ತರಾಪೋಶನಂ ಸಮರ್ಪಯಾಮಿ ।। ಅಮೃತಾಪಿಧಾನಮಸಿ ಸ್ವಾಹಾ ।।**

ಈ ಮಂತ್ರಗಳಿಂದ ಶುದ್ಧವಾದ ನೀರನ್ನು ಶಂಖದಿಂದ ಪಾತ್ರೆಯಲ್ಲಿ ಬಿಡಬೇಕು.

**ಮಹಾಮಂಗಳಾರತಿ**

**ಜಯತಿ ಹರಿರಚಿಂತ್ಯಃ ಸರ್ವದೇವೈಕವಂದ್ಯಃ ।**
**ಪರಮಗುರುರಭೀಷ್ಟಾವಾಪ್ತಿದಃ ಸಜ್ಜನಾನಾಮ್ ।।**
**ನಿಖಿಲಗುಣಗಣಾರ್ಣೋ ನಿತ್ಯನಿರ್ಮುಕ್ತದೋಷಃ ।।**
**ಸರಸಿಜನಯನೋಽಸೌ ಶ್ರೀಪತಿರ್ಮಾನದೋ ನಃ ।।**

**ರಮಾದಿಪೂಜೆ**

ಶಂಖ, ಪ್ರಾಣದೇವರು ಮೊದಲಾದವರಿಗೆ ಮೂರು ಬಾರಿ ತೀರ್ಥವನ್ನು ಕೊಡಬೇಕು. ನಿರ್ಮಾಲ್ಯವಾದ ಗಂಧ-ತುಳಸೀ-ಪುಷ್ಪಗಳನ್ನು ಸಮರ್ಪಿಸಬೇಕು. ನೈವೇದ್ಯವನ್ನು ಮಾಡಬೇಕು.

ನೈವೇದ್ಯದ ವಿಷಯದಲ್ಲಿ ಹೀಗೆ ತಿಳಿಯಬೇಕು. ದೇವರಿಗೆ ಮಾತ್ರ ನಿವೇದಿಸಿದ ಅನ್ನವನ್ನು ವೈಶ್ವದೇವಕ್ಕಾಗಿ ಇಟ್ಟುಕೊಳ್ಳಬೇಕು. ರಮಾದಿ ದೇವತೆಗಳಿಗೆ ಸಮರ್ಪಿಸಿದ ಅನ್ನವನ್ನು ವೈಶ್ವದೇವಕ್ಕಾಗಿ ಉಪಯೋಗಿಸ ಕೂಡದು. ವೈಶ್ವದೇವದ ಅನ್ನವನ್ನು ತೀರ್ಥದಿಂದ ಪ್ರೋಕ್ಷಣೆ ಮಾಡಬಾರದು. ಆದ್ದರಿಂದ ದೇವರ ನೈವೇದ್ಯವಾದ ಕೂಡಲೇ ರಮಾದಿದೇವತೆಗಳಿಗೆ ನೈವೇದ್ಯ ಮಾಡುವುದಕ್ಕಿಂತಲೂ ಮೊದಲೇ ಸ್ವಲ್ಪ ಅನ್ನವನ್ನು ವೈಶ್ವದೇವಕ್ಕಾಗಿ ಪ್ರತ್ಯೇಕಿಸಿಕೊಳ್ಳಬೇಕು. ಉಳಿದ ಅನ್ನ ಮುಂತಾದ ಎಲ್ಲ ಅಡಿಗೆಯನ್ನು ರಮಾದೇವಿಗೆ ಮತ್ತು ವಾಯುದೇವರಿಗೆ ಕ್ರಮವಾಗಿ ಸಮರ್ಪಿಸಬೇಕು.

ರಮಾ-ವಾಯುಗಳಿಗೆ ನಿವೇದಿತವಾದ ಅನ್ನಾದಿಪದಾರ್ಥಗಳಿಂದ ಸ್ವಲ್ಪ ಸ್ವಲ್ಪ ಭಾಗವನ್ನು ಪ್ರತ್ಯೇಕವಾಗಿ ತೆಗೆದು ಶೇಷಾದಿಗಳಿಗೆ ಸನಕಾದಿಗಳಿಗೆ ನಿವೇದಿಸಬೇಕು. ರಮಾ-ವಾಯುಗಳಿಗೆ ನಿವೇದಿತವಾದ ಆಹಾರವನ್ನು ಮಾತ್ರ ನಾವು ಆಹಾರರೂಪವಾಗಿ ಸ್ವೀಕರಿಸಬೇಕು. ಶೇಷಾದಿಗಳಿಗೆ ನಿವೇದಿಸಿದ ಅನ್ನಾದಿಗಳನ್ನು ಸ್ವೀಕರಿಸಬಾರದು. ಅದನ್ನು ಜಲ-ಅಗ್ನಿ-ಶುದ್ಧಸ್ಥಳಗಳಲ್ಲಿ ವಿಸರ್ಜಿಸಬೇಕು.

**ರಮಾಬ್ರಹ್ಮಾದಯೋ ದೇವಾಃ ಸನಕಾದ್ಯಾಃ ಶುಕಾದಯಃ ।**
**ಶ್ರೀನೃಸಿಂಹಪ್ರಸಾದೋಽಯಂ ಸರ್ವೇ ಗೃಹ್ಣಂತು ವೈಷ್ಣವಾಃ ॥**

ಈ ಮಂತ್ರದಿಂದ ನೈವೇದ್ಯಮಾಡಿ, ಮಂಗಳಾರತಿಯನ್ನು ಮಾಡಬೇಕು. ನಂತರ ದೇವರನ್ನು ಭುಜಂಗಿಸಬೇಕು.

**ಯಸ್ಯಸ್ಮೃತ್ಯಾ ಚ ನಾಮೋಕ್ತ್ಯಾ ತಪಃಪೂಜಾಕ್ರಿಯಾದಿಷು ।**
**ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥**

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥**

ಅನೇನ ದೇವಪೂಜನೇನ ಭಾರತೀರಮಣಮುಖ್ಯಪ್ರಾಣಾಂತರ್ಗತ ಲಕ್ಷ್ಮೀನಾರಾಯಣಃ ಪ್ರೀಯತಾಂ ಪ್ರೀತೋ ಭವತು

॥ ಶ್ರೀ ಕೃಷ್ಣಾರ್ಪಣಮಸ್ತು ॥

## ಗುರುಗಳ ಅಭಿಷೇಕ

ದೇವರ ಎದುರಿಗೆ ಶೇಷದೇವರ ಪರ್ಯಂತ ಮಾತ್ರ ಪೂಜಿಸಬೇಕು. ಆದ್ದರಿಂದ ದೇವರನ್ನು ಭುಜಂಗಿಸಿದ ನಂತರದಲ್ಲಿ ಯತಿಗಳ ಪೂಜೆಯನ್ನು ಮಾಡಬೇಕು.

**ಬ್ರಹ್ಮಾಂತಾ ಗುರವಃ ಸಾಕ್ಷಾದಿಷ್ಟಂ ದೈವಂ ಶ್ರಿಯಃಪತಿಃ ।**
**ಆಚಾರ್ಯಾಃ ಶ್ರೀಮದಾಚಾರ್ಯಾಸ್ಸಂತು ಮೇ ಜನ್ಮಜನ್ಮನಿ ॥**

ಈ ಶ್ಲೋಕದಿಂದ ಶ್ರೀಸತ್ಯಪ್ರಮೋದರಿಂದ ಪ್ರಾರಂಭಿಸಿ ಶ್ರೀಪದ್ಮನಾಭತೀರ್ಥರ ವರೆಗೆ ಇರುವ ಗುರುಗಳ ಸ್ಮರಣೆಯನ್ನು ಮಾಡಬೇಕು. ಮನೆಯಲ್ಲಿ ಇರುವ ವೃಂದಾವನಗಳಿಗೆ ಆಯಾ ಯತಿಗಳ ಶ್ಲೋಕಗಳನ್ನು ಹೇಳುತ್ತಾ ಅಭಿಷೇಕ ಮಾಡಬೇಕು. ನಂತರ ನಿರ್ಮಾಲ್ಯಗಂಧ-ಅಕ್ಷತಾದಿಗಳನ್ನು ನೀಡಬೇಕು. ತೀರ್ಥವನ್ನು ನೀಡಿ ಕೆಳಗಿನ ಶ್ಲೋಕವನ್ನು ಹೇಳುತ್ತಾ ಹಸ್ತೋದಕವನ್ನು ಸಮರ್ಪಿಸಬೇಕು.

**ವಟೌ ತು ಸಮದತ್ತಂ ಸ್ಯಾತ್ ಗೃಹಸ್ಥೇ ದ್ವಿಗುಣಂ ಭವೇತ್ ।**
**ವಾನಪ್ರಸ್ಥೇ ಶತಗುಣಂ ಯತೌ ದತ್ತಮನಂತಕಮ್ ॥**

**ವಿಶೇಷ ಸೂಚನೆ** : ಏಕಾದಶಿಯ ದಿವಸ ಶಂಖಕ್ಕೆ, ಪ್ರಾಣದೇವರಿಗೆ, ಗರುಡ-ಶೇಷರಿಗೆ, ಯತಿಗಳಿಗೆ ಒಂದು ಸಲ ಮಾತ್ರ ತೀರ್ಥ ಕೊಡಬೇಕು. ಮತ್ತು ಗಂಧ, ನೈವೇದ್ಯ ಸಮರ್ಪಣೆ ಇರುವುದಿಲ್ಲ. ದೇವರಿಗೂ ಸ್ವಾದೂದಕದಿಂದ ಅಭಿಷೇಕ ಮತ್ತು ಅನ್ನಾದಿಗಳ ನೈವೇದ್ಯವನ್ನು ಮಾಡಬಾರದು. ಕೇವಲ ಫಲ-ಕಲ್ಲುಸಕ್ಕರೆ ಮುಂತಾದುವನ್ನು ಸಮರ್ಪಿಸಬೇಕು.

॥ ಶ್ರೀಕೃಷ್ಣಾರ್ಪಣಮಸ್ತು ॥